سُورَةُ الْهُمَزَةِ مَكِّيَّةٌ — آياتها ٩ — رکوعها ١

## 104. ಅಲ್ ಹುಮಝಃ

ಸೂ. 9 ರು. 1

(ಅವತೀರ್ಣ - ಮಕ್ಕಾದಲ್ಲಿ)

بِسْمِ اللّٰهِ الرَّحْمٰنِ الرَّحِيْمِ

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

وَيْلٌ لِّكُلِّ هُمَزَةٍ لُّمَزَةِۣ ۝١

1. (ಎದುರೆದುರೇ) ಜನರನ್ನು ಮೂದಲಿಸುವ ಮತ್ತು (ಬೆನ್ನ ಹಿಂದೆ) ದೂಷಿಸುವ ಅಭ್ಯಾಸವಿರುವ ಪ್ರತಿಯೊಬ್ಬನಿಗೂ ವಿನಾಶವಿದೆ-

الَّذِىْ جَمَعَ مَالًا وَّعَدَّدَهٗ ۝٢

2. ಅವನು ಸಂಪತ್ತನ್ನು ಸಂಗ್ರಹಿಸಿದನು ಮತ್ತು ಅದನ್ನು ಎಣಿಸಿ ಎಣಿಸಿ ಇಟ್ಟನು-

يَحْسَبُ اَنَّ مَالَهٗۤ اَخْلَدَهٗ ۝٣

3. ಅವನ ಸಂಪತ್ತು ಶಾಶ್ವತವಾಗಿ ಅವನ ಬಳಿಯಲ್ಲೇ ಇರುವುದೆಂದು ಅವನು ಭಾವಿಸುತ್ತಾನೆ.[1]

كَلَّا لَيُنْۢبَذَنَّ فِى الْحُطَمَةِ ۝٤

4. ಖಂಡಿತ ಇಲ್ಲ. ಅವನು ಪುಡಿಗುಟ್ಟಿ ಬಿಡುವ ಸ್ಥಳಕ್ಕೆ ಎಸೆಯಲ್ಪಡುವನು.

وَمَاۤ اَدْرٰىكَ مَا الْحُطَمَةُ ۝٥

5. ಪುಡಿಗುಟ್ಟಿ ಬಿಡುವ ಆ ಸ್ಥಳ ಏನೆಂದು ನಿಮಗೇನು ಗೊತ್ತು?

نَارُ اللّٰهِ الْمُوْقَدَةُ ۝٦

6. ಚೆನ್ನಾಗಿ ಧಗಧಗಿಸಲ್ಪಟ್ಟಿರುವ ಅಲ್ಲಾಹನ ಬೆಂಕಿ-

الَّتِىْ تَطَّلِعُ عَلَى الْاَفْـِٕدَةِ ۝٧

7. ಅದು ಹೃದಯಗಳ ವರೆಗೂ ತಲಪುವುದು.

1. "ಅವನ ಸಂಪತ್ತು ಅವನಿಗೆ ಅಮರ ಜೀವನವನ್ನು ದಯಪಾಲಿಸುತ್ತದೆ ಎಂದು ಅವನು ಭಾವಿಸಿರುವಂತಿದೆ. ಒಂದು ದಿನ ಅವನು ಇದೆಲ್ಲವನ್ನೂ ಬಿಟ್ಟು ಬರಿಗೈಯಲ್ಲಿ ಲೋಕದಿಂದ ನಿರ್ಗಮಿಸಬೇಕಾಗುವುದು ಎಂಬ ಭಾವನೆಯೂ ಅವನಲ್ಲೆಂದೂ ಮೂಡುವುದಿಲ್ಲ" ಎಂಬುದು ಇದರ ಇನ್ನೊಂದು ಅರ್ಥ.

8. ಅದನ್ನು ಅವರ ಮೇಲೆ ಆವರಿಸಿ ಮುಚ್ಚಿ ಬಿಡಲಾಗುವುದು- إِنَّهَا عَلَيْهِم مُّؤْصَدَةٌ ﴿٨﴾

9. ಅವರು ಎತ್ತರವಾದ ಸ್ತಂಭಗಳಲ್ಲಿ (ಸಿಲುಕಿ ಕೊಂಡಿರುವ ಸ್ಥಿತಿಯಲ್ಲಿ).[2] فِي عَمَدٍ مُّمَدَّدَةٍ ﴿٩﴾

ع ٢٩

---

2. 'ಫಿ ಅಮದಿಮ್ಮುಮದ್ದದಃ' ಎಂಬುದಕ್ಕೆ ಅನೇಕ ಅರ್ಥಗಳಿರಲು ಸಾಧ್ಯವಿದೆ. ಮೊದಲನೆಯದಾಗಿ ನರಕದ ಬಾಗಿಲುಗಳನ್ನು ಭದ್ರಪಡಿಸಿ ಅದರಲ್ಲಿ ಎತ್ತರವಾದ ಕಂಬಗಳನ್ನು ನಾಟಿ ಬಿಡಲಾಗುವುದು. ಎರಡನೆಯದಾಗಿ ಈ ಅಪರಾಧಿಗಳನ್ನು ಎತ್ತರವಾದ ಕಂಬಗಳಿಗೆ ಕಟ್ಟಿ ಬಿಡಲಾಗುವುದು. ಮೂರನೆಯದಾಗಿ ಅದರ ಅಗ್ನಿಜ್ವಾಲೆಗಳು ಉನ್ನತ ಕಂಬಗಳಂತೆ ಮೇಲೇಳುತ್ತಿರುವುವು.